# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 495(552) |
| ಸದಸ್ಯರ ಹೆಸರು | : | ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 21/02/2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಸರ್ಕಾರಿ ನೌಕರರ ವಿರುದ್ಧ 9 ತಿಂಗಳ ಒಳಗಾಗಿ ಶಿಸ್ತು ಕ್ರಮ ಜರುಗಿಸಲು ಕ್ರಮವಹಿಸುವ ಬಗ್ಗೆ ಸುತ್ತೋಲೆ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಇಲಾಖೆಯಲ್ಲಿ ನಿಯಮ 11(3)ರಡಿ 2 ನೌಕರರಿಗೆ ನೋಟೀಸ್ ನೀಡಿ 3 ವರ್ಷಗಳಾದರೂ ಯಾವುದೇ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಸದರಿ ಪ್ರಕರಣದಲ್ಲಿ ಉದ್ದೇಶ ಪೂರ್ವಕವಾಗಿ ವಿಳಂಬವಾಗುವಂತೆ ಮಾಡಿರುವ ಅಧಿಕಾರಿ / ನೌಕರರ ವಿರುದ್ಧ ಯಾವ ಕ್ರಮ ಜರುಗಿಸಲಾಗಿದೆ; (ಮಾಹಿತಿ ನೀಡುವುದು) | ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಅಗತ್ಯವಿಲ್ಲದಿದ್ದರೂ ಹೆಚ್ಚಿನ ಪ್ರಮಾಣದಲ್ಲಿ ಕಂಪ್ಯೂಟರ್ ಉಪಕರಣಗಳನ್ನು ಖರೀದಿಸಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ತ್ರಿಸದಸ್ಯ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 119 ಇಎಸ್‌ಡಬ್ಲ್ಯೂ 2016, |

| | | |
|---|---|---|
| | | ದಿನಾಂಕ:16.01.2019ರಂದು ರಚಿಸಲಾಯಿತು. ಸಮಿತಿಯು ಪ್ರಾಥಮಿಕ ತನಿಖೆಯನ್ನು ನಡೆಸಿ, ದಿನಾಂಕ:09.12.2019ರಂದು ವರದಿಯನ್ನು ನೀಡಿದ್ದು, ಪ್ರಾಥಮಿಕ ತನಿಖಾ ವರದಿಯಲ್ಲಿ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ, ಶಿಸ್ತುಕ್ರಮ ಜರುಗಿಸಲು ಕ್ರಮವಹಿಸಲಾಗುತ್ತಿದೆ. |
| ಈ) | ಸದರಿ ಪ್ರಕರಣಗಳಿಗೆ ಇಬ್ಬರು ನೌಕರರಿಗೆ ಮುಂಬಡ್ತಿ ನೀಡದೇ ಆರ್ಥಿಕ ನಷ್ಟ ಹಾಗೂ ಮಾನಸಿಕ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಅಗತ್ಯವಿಲ್ಲದಿದ್ದರೂ ಹೆಚ್ಚಿನ ಪ್ರಮಾಣದಲ್ಲಿ ಕಂಪ್ಯೂಟರ್ ಉಪಕರಣಗಳನ್ನು ಖರೀದಿಸಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ತ್ರಿದಸ್ಯ ಸಮಿತಿಯು ದಿನಾಂಕ:09-12-2019 ರಂದು ವರದಿಯನ್ನು ಸಲ್ಲಿಸಿರುತ್ತದೆ. ಈ ವರದಿಯ ಆಧಾರದ ಮೇಲೆ ಪ್ರಕರಣದಲ್ಲಿ ಭಾಗಿಯಾದ 20 ಅಧಿಕಾರಿ / ನೌಕರರನ್ನು ಒಳಗೊಂಡಂತೆ ಶಿಸ್ತು ಕ್ರಮ ಜರುಗಿಸಲು ಅನುವಾಗುವಂತೆ ಕರಡು ಅನುಬಂಧ-01 ರಿಂದ ಅನುಬಂಧ-4ನ್ನು ಅನುಬಂಧ-3ರ ದಾಖಲೆಗಳೊಂದಿಗೆ ಕರಡು ದೋಷಾರೋಪಣಾ ಪಟ್ಟಿಯನ್ನು ಹೊರಡಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.<br>ಪ್ರಕರಣದಲ್ಲಿ ಭಾಗಿಯಾದ 20 ಅಧಿಕಾರಿ / ನೌಕರರುಗಳ ಪೈಕಿ ಈ ಇಬ್ಬರೂ ನೌಕರರೂ ಸಹ ಒಳಗೊಂಡಿರುತ್ತಾರೆ. |
| ಉ) | ಇದೇ ಪ್ರಕರಣದಲ್ಲಿ 2 ಜನ ಉಪ ನಿರ್ದೇಶಕರಿಗೆ ಮುಂಬಡ್ತಿ ನೀಡಲಾಗಿದ್ದು, ಪ್ರಥಮ ದರ್ಜೆ ಸಹಾಯಕರಿಗೆ ಮುಂಬಡ್ತಿ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೇಯೆ: | ಡಾ ॥ ಹೆಚ್.ಆರ್.ಪ್ರಕಾಶ್ ನಾಯಕ್, ಉಪ ನಿರ್ದೇಶಕರು (ತಾಂತ್ರಿಕ) ಮತ್ತು ಶ್ರೀಮತಿ ಟಿ.ನಾರಾಯಣಮ್ಮ., ಉಪ ನಿರ್ದೇಶಕರು (ಆಡಳಿತ ಮತ್ತು ಲೆಕ್ಕಪತ್ರ), ಇವರುಗಳಿಗೆ ಯಾವುದೇ ದೋಷಾರೋಪಣಾ ಪಟ್ಟಿ ಜಾರಿಯಾಗದ ಕಾರಣ ಮುಂಬಡ್ತಿ ನೀಡಲಾಗಿದೆ.<br>ಆದರೆ, ಇಬ್ಬರು ಗ್ರೂಪ್ 'ಸಿ' ವೃಂದದ ನೌಕರರಿಗೆ ನಿರ್ದೇಶಕರ ಹಂತದಲ್ಲಿ ದೋಷಾರೋಪಣಾ ಪಟ್ಟಿಯನ್ನು |

| | | |
|---|---|---|
| | | ಜಾರಿಗೊಳಿಸಲಾಗಿರುತ್ತದೆ. ಆದ್ದರಿಂದ, ಸದರಿಯವರುಗಳಿಗೆ ಮುಂಬಡ್ತಿ ನೀಡಲು ನಿಯಮಗಳಲ್ಲಿ ಅವಕಾಶವಿಲ್ಲ. |

**ಸಂಖ್ಯೆ: ಇಪಿ 13 ಇಎಸ್‌ಡಬ್ಲ್ಯೂ 2022**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು